## ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1396
2) ಸದಸ್ಯರ ಹೆಸರು : ಶ್ರೀ ಪಿ.ಆರ್.ರಮೇಶ್ (ನಾಮನಿರ್ದೇಶನ ಹೊಂದಿದವರು)
3) ಉತ್ತರಿಸುವ ದಿನಾಂಕ: : 23-09-2021
4) ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಅನೇಕ ಹಾರ್ಡ್‌ವೇರ್ ಮತ್ತು ಎಲೆಕ್ಟ್ರಿಕಲ್ ಅಂಗಡಿಗಳಲ್ಲಿ ಸಾರ್ವಜನಿಕರಿಗೆ ಸಗಟು/ಚಿಲ್ಲರೆ ಸಾಮಾಗ್ರಿಗಳನ್ನು ಮಾರಾಟ ಮಾಡಿ ಅನಧಿಕೃತ ಬಿಲ್/ರಸೀದಿ ಪತ್ರ ನೀಡಿ ಸರ್ಕಾರಕ್ಕೆ ಜಿ.ಎಸ್.ಟಿ. ತೆರಿಗೆ ವಂಚನೆ ಮಾಡುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರದ ಕ್ರಮವೇನು; (ವಿವರ ನೀಡುವುದು) | ಹೌದು<br>ಜಿ.ಎಸ್.ಟಿ. ಕಾಯ್ದೆಯ ಪ್ರಕಾರ ಎಲ್ಲಾ ನೋಂದಾಯಿತ ವರ್ತಕರು ರೂ.200.00 ಕ್ಕಿಂತ ಹೆಚ್ಚಿನ ದರದ ಎಲ್ಲಾ ಮಾರಾಟಗಳಿಗೆ ಬಿಲ್ ನೀಡುವುದು ಕಡ್ಡಾಯವಾಗಿರುವುದರಿಂದ, ಖರೀದಿ ಬಿಲ್ ನೀಡದೇ ಇರುವ ಬಗ್ಗೆ ಪರೀಕ್ಷಾರ್ಥ ಖರೀದಿ(Test Purchase) ನಡೆಸಿ ಬಿಲ್ ನೀಡದಿದ್ದ ಪಕ್ಷದಲ್ಲಿ ಜಿ.ಎಸ್.ಟಿ. ಕಾಯ್ದೆಯ ಕಾನೂನು ಪ್ರಕಾರ ರೂ.20,000/- ದಂಡ ಶುಲ್ಕ ವಸೂಲಿ ಮಾಡಲಾಗಿದೆ. ಅಧಿಕೃತ ಬಿಲ್ ನೀಡದೇ ಇದ್ದ ಹಾರ್ಡ್‌ವೇರ್ ಮತ್ತು ಎಲೆಕ್ಟ್ರಿಕಲ್ ಅಂಗಡಿಗಳಿಗೆ ಇಲಾಖೆಯ ಅಧಿಕಾರಿಗಳಿಂದ ಪರೀಕ್ಷಾರ್ಥ ಖರೀದಿ ನಡೆಸಲಾಗುತ್ತಿದೆ. ಒಟ್ಟು 660 ಪ್ರಕರಣಗಳನ್ನು ದಾಖಲಿಸಲಾಗಿದೆ. |
| ಆ) | ಈ ರೀತಿಯ ಅನಧಿಕೃತ ವ್ಯವಹಾರದ ಕುರಿತು ಸರ್ಕಾರದಿಂದ ಯಾವುದಾದರೂ ಪ್ರಕರಣಗಳು ದಾಖಲಿಸಲ್ಪಟ್ಟಿದೆಯೇ; (ಇದ್ದಲ್ಲಿ ವಿವರ ನೀಡುವುದು) | ಅನಧಿಕೃತ ವ್ಯವಹಾರದ ಪ್ರಕರಣಗಳು: 1059<br>ಜಿ.ಎಸ್.ಟಿ. ಕಾಯ್ದೆಯ ಕಾನೂನು ಪ್ರಕಾರ ಸೂಕ್ತ ದಂಡ ವಿಧಿಸಿ ವಸೂಲಿ ಮಾಡಲಾಗಿದೆ. |
| ಇ) | ಎಲೆಕ್ಟ್ರಿಕಲ್ ಬಲ್ಬ್/ಅಲಂಕಾರಿಕಾ ಬಲ್ಬ್‌ಗಳ ಮೇಲೆ ಯಾವುದೇ ರೀತಿಯ ದರಗಳನ್ನು ನಮೂದಿಸದೇ ಸದರಿ ಸಾಮಾಗ್ರಿಗಳನ್ನು ದುಬಾರಿ ಮೊತ್ತಕ್ಕೆ ಮಾರಾಟ ಮಾಡಿ ಸಾರ್ವಜನಿಕರಿಗೆ ಮೋಸ ಮಾಡುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರದ ಕ್ರಮವೇನು? (ವಿವರ ನೀಡುವುದು) | ಈ ರೀತಿಯ ಪ್ರಕರಣಗಳು ಇರುವುದಿಲ್ಲ. |

ಸಂಖ್ಯೆ: ಆಇ 85 ಸಿಎಸ್ಎಲ್ 2021

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ